# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 485
ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ ನಾಗರಾಜ್)
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 09-03-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಪಿರಿಯಾಪಟ್ಟಣ ತಾಲ್ಲೂಕು ಕೇಂದ್ರದಿಂದ ಕೇವಲ 8 ಕಿ.ಮೀ ದೂರದಲ್ಲಿರುವ ಕೆ.ಎಸ್. ಕಾಳಮರಿಗೌಡನಗರ (ಬುದುತಿಟ್ಟು ಸಮೀಪ) ಸರ್ಕಾರಿ ಪ್ರಾಥಮಿಕ ಶಾಲೆಯು ಅರೆಬರೆ ನಿರ್ಮಾಣಗೊಂಡಿರುವ ಖಾಸಗಿ ಮನೆಯಲ್ಲಿ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಇದಕ್ಕೆ ಪಾವತಿಸುತ್ತಿರುವ ಬಾಡಿಗೆಯನ್ನು ಯಾರು ನೀಡುತ್ತಿದ್ದಾರೆ; ಇಲ್ಲಿ ಓದುತ್ತಿರುವ ವಿದ್ಯಾರ್ಥಿನಿಯರಿಗೆ ಶೌಚಾಲಯ ಹಾಗೂ ಕುಡಿಯುವ ನೀರಿನ ಸೌಲಭ್ಯ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಸದರಿ ಶಾಲೆಯನ್ನು ಬಾಡಿಗೆ ರಹಿತವಾಗಿ ಖಾಸಗಿ ಕಟ್ಟಡದಲ್ಲಿ ನಡೆಸಲಾಗುತ್ತಿದೆ.<br>ಪ್ರಸ್ತುತ, ಶಾಲೆ ನಡೆಯುತ್ತಿರುವ ಕಟ್ಟಡದಲ್ಲಿ ವಿದ್ಯಾರ್ಥಿಗಳಿಗೆ ಶೌಚಾಲಯ ಮತ್ತು ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿರುತ್ತದೆ. |
| (ಆ) | ಈ ಶಾಲಾ ಕಟ್ಟಡ ನಿರ್ಮಾಣಕ್ಕೆ 2009ರಲ್ಲಿ ಅಣ್ಣಾಮಲೈ ಎಂಬುವವರು 3 ಗುಂಟೆ ಜಾಗ ನೀಡಿದ್ದು, 2011ರಲ್ಲಿ ಸರ್ವ ಶಿಕ್ಷಣ ಅಭಿಯಾನದ ಅಡಿಯಲ್ಲಿ ಕಟ್ಟಡ ನಿರ್ಮಾಣ ಆರಂಭಗೊಂಡಿದ್ದರೂ, ಇನ್ನೂ ಪೂರ್ಣವಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರಿ ಪಾಥಮಿಕ ಶಾಲೆ, ಕಾಳಮರೀಗೌಡನಗರ ಈ ಶಾಲೆಯು 2004-05ರಲ್ಲಿ ಪ್ರಾರಂಭವಾಗಿದ್ದು, 2006-07ನೇ ಸಾಲಿನಲ್ಲಿ ಸರ್ವ ಶಿಕ್ಷಣ ಅಭಿಯಾನ ಯೋಜನೆಯಡಿಯಲ್ಲಿ ಕಟ್ಟಡ ನಿರ್ಮಾಣಕ್ಕಾಗಿ ರೂ.4.35 ಲಕ್ಷ ಅನುದಾನ ಬಿಡುಗಡೆಯಾಗಿರುತ್ತದೆ. ಆದರೆ, ಸದರಿ ಶಾಲೆಗೆ ನಿವೇಶನ ಇಲ್ಲದಿದ್ದ ಕಾರಣ, 2009ರಲ್ಲಿ ಅಣ್ಣಾಮಲೈ ಎಂಬುವವರು 3 ಗುಂಟೆ ಜಮೀನನ್ನು ದಾನ ನೀಡಿರುತ್ತಾರೆ.<br>ಸದರಿ ಶಾಲೆಯ 03 ಕೊಠಡಿ ನಿರ್ಮಾಣ ಕಾಮಗಾರಿಯನ್ನು ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ (ಎಸ್.ಡಿ.ಎಂ.ಸಿ)ಗೆ ವಹಿಸಲಾಗಿತ್ತು. ಶಾಲಾ ಎಸ್.ಡಿ.ಎಂ.ಸಿ. ಮತ್ತು ಸ್ಥಳೀಯರಲ್ಲಿ ಭಿನ್ನಾಭಿಪ್ರಾಯ ಉಂಟಾದ ಕಾರಣ, ಕಾಮಗಾರಿ ಸ್ಥಗಿತಗೊಂಡಿರುವುದು ಕಂಡು ಬಂದಿರುತ್ತದೆ. |

| | ಪ್ರಶ್ನೆ | ಉತ್ತರ |
|---|---|---|
| (ಇ) | ಐದು ಹುಡುಗರಿಂದ ಆರಂಭವಾದ ಈ ಶಾಲೆಯಲ್ಲಿ 17 ಮಕ್ಕಳು ಓದುತ್ತಿದ್ದು, ಈಗ ಅವರೂ ಬಿಟ್ಟು ಹೋಗುತ್ತಿರುವುದು ಗಮನಕ್ಕೆ ಬಂದಿದೆಯೇ? | ಪ್ರಸ್ತುತ, ಈ ಶಾಲೆಯಲ್ಲಿ 13 ಮಕ್ಕಳು ವ್ಯಾಸಂಗ ಮಾಡುತ್ತಿದ್ದು,<br>ವಿದ್ಯಾರ್ಥಿಗಳ ತರಗತಿವಾರು ದಾಖಲಾತಿ ವಿವರ ಈ ಕೆಳಕಂಡಂತಿದೆ:<br>1ನೇ ತರಗತಿ – 07,<br>2ನೇ ತರಗತಿ – 02,<br>3ನೇ ತರಗತಿ – ಇಲ್ಲ,<br>4ನೇ ತರಗತಿ – 02,<br>5ನೇ ತರಗತಿ – 02,<br>ಒಟ್ಟು 13 ವಿದ್ಯಾರ್ಥಿಗಳಿದ್ದಾರೆ. |

**ಇಪಿ 51 ಯೋಸಕ 2020**

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು